# ಬೇವು-ಬೆಲ್ಲ

-ಸುಮನಾ



ಮಧುಶ್ರೀ ಪ್ರಕಾಶನ
ಬೆಂಗಳೂರು

# ಬೇವು-ಬೆಲ್ಲ

ರಚನೆ : ಸುಮಸಾ, ಎಂ.ಎ.

ಮಧುಶ್ರೀ ಪ್ರಕಾಶನ
222/2, ಮಹಡಿಯ ಮೇಲೆ
7ನೇ 'ಎ' ಮುಖ್ಯ ರಸ್ತೆ
ಆರ್. ಪಿ. ಸಿ. ಲೇ ಔಟ್
ವಿಜಯನಗರ ಪೂರ್ವ
ಬೆಂಗಳೂರು-560040

ಪ್ರಕಟಣೆ : 1987

ಬೆಲೆ : 3-00

ಮುದ್ರಕರು :
ಶ್ರೀ ಭಾವನಾ ಪ್ರೆಸ್
41, ತೋಟದ ದೇವರ ಗಲ್ಲಿ
ಅರಳೇಪೇಟೆ
ಬೆಂಗಳೂರು-560053

# ೧. ಭಾಷೆ

ಧ್ವನಿ ೧ :-ಎಲ್ಲಾದರು ಇರು
ಎಂತಾದರೂ ಇರು
ನೀ ಕನ್ನಡಿಗನಾಗಿರು ||

ಧ್ವನಿ ೨ :-ಏನು ಕನ್ನಡದ ಮೇಲೆ ಪದ್ಯ ಹಾಡುವಂಗಿದೆ.

ಧ್ವನಿ ೧ :-ನಮ್ಮ ಭಾಷೆ ಅಂದಮೇಲೆ ಅವರ ಮೇಲೆ ಅಭಿಮಾನ ಇರಬೇಡ್ವೇ? ಅದ್ಕೇ ಹಾಡಿದೆ.

ಧ್ವನಿ ೨ :-ಭಾಷೆ ಅಂದ ಮೇಲೆ ನನಗೆ ಒಂದೆರಡು ನೈಜ ಘಟನೆಗಳನ್ನು ಹೇಳಬೇಕು ಅನ್ನಿಸುತ್ತೆ.

ಧ್ವನಿ ೧ :-ಏನದು ಹೇಳಿ....ತಡವ್ಯಾಕೆ?

ಧ್ವನಿ ೨ :-೧೯೫೬ರಲ್ಲಿ ಭಾಷಾವಾರು ಪ್ರಾಂತ್ಯಗಳ ರಚನೆ ಆಯಿತು ಆದರೆ ಭಾರತೀಯನಾದವನು ಎಲ್ಲಾದರೂ ಇರಲಿ, ಎಂತಾದರೂ ಇರಲಿ, ಅಲ್ಲಿನ ಭಾಷೆಯನ್ನು ಕಲಿಯುವುದು ಅನೇಕ ದೃಷ್ಟಿಯಿಂದ ಒಳ್ಳೆಯದು. ನೀವೇನೇಳ್ತೀರಿ?

ಧ್ವನಿ ೧ :-ಸರಿ....

ಧ್ವನಿ ೨ :-ಆದ್ರೆ ಈಗ ನಾನು ಎದುರಿಸಿದ ಎರಡು ಘಟನೆಗಳು ಅದಕ್ಕೆ ತದ್ವಿರುದ್ಧ ನೋಡಿ.

ಧ್ವನಿ ೧ :-ಯಾರೇ ಆಗಲೀ, ಆಯಾ ಪ್ರದೇಶದ ಭಾಷೆಯನ್ನು ಕಲಿಯಬೇಕು. ಅಲ್ಲಿನ ವ್ಯವಹಾರಕ್ಕೆ ಜನರೊಡನೆ ಬೆರೆತು ನಡೆಯಲು ಬಹಳ ಮುಖ್ಯ. ಆದರೆ ನೀವೇನು ಅದಕ್ಕೆ ತದ್ವಿರುದ್ಧ ಅಂತ ಹೇಳಿದ್ರಿ ಅದೇನು ಸ್ವಲ್ಪ ಹೇಳ್ತೀರಾ ?

ಧ್ವನಿ ೨ :-ನೋಡಿ ದೇಶ ಒಂದೇ ಆದ್ರೆ ನಮ್ಮ ದೇಶದಲ್ಲಿರೋ ಅಷ್ಟು ಭಾಷೆ ಪ್ರಪಂಚದಲ್ಲಿ ಎಲ್ಲೂ ಇಲ್ಲ. ಅಷ್ಟು ಭಾಷಾ ಸಂಪತ್ತು, ವೈವಿಧ್ಯತೆ ಇದೆ. ನಿಜಕ್ಕೂ ಇದು ಒಂದು ರೀತಿಯ ಹೆಮ್ಮೆಪಡುವಂಥದ್ದೇ. ಆದ್ರೆ ಅಷ್ಟೇ ಕಷ್ಟ. ಒಂದೊಂದು ಭಾಷೆಯಲ್ಲೂ ಅದೆಷ್ಟು ವೈವಿಧ್ಯತೆ? ಕನ್ನಡವನ್ನೇ ತೆಗೆದುಕೊಳ್ಳಿ ಮಂಗಳೂರು, ಧಾರವಾಡ, ಮೈಸೂರು ಒಂದೊಂದು ಕಡೆ ಒಂದೊಂದು ರೀತಿ, ಪಟ್ಟಣ, ಹಳ್ಳಿಗಳಲ್ಲಿ, ಈ ಭಾಷಾವಾರು ಪ್ರಾಂತ್ಯ ರಚನೆಯಾದ ಮೇಲೆ ನಾವು ರಾಜ್ಯೋತ್ಸವ ಆಚರಿಸಿ, ನಮ್ಮ ಭಾಷೆ, ಕಲೆ, ಸಂಸ್ಕೃತಿ ಬಗೆಗೆ ಹೆಮ್ಮೆ ಪಟ್ಟುಕೊಂಡು ನಾಡ ಹಬ್ಬದಂತೆ ಆಚರಿಸಿ ಆನಂದ ಪಡ್ತೇವೆ.

ಒಂದು ಸಾರಿ ಒಂದು ಆಫೀಸಿನಲ್ಲಿ ಹೀಗಾಯ್ತು ನೋಡಿ, ಕನ್ನಡ ರಾಜ್ಯದಲ್ಲಿರೋ ಬೇರೆ ರಾಜ್ಯದಾತ ಬೇರೆ ಭಾಷೆಯಾದರೇನು? ಅತ ಕನ್ನಡ ರಾಜ್ಯಕ್ಕೆ

ಬಂದ ಮೇಲೆ ಅಲ್ಲಿನ ಭಾಷೆ ಕಲಿತು, ಅಲ್ಲಿನ ಜನ ರೊಡನೆ ಬೆರೆತು ನಡೆಯಬೇಕು. ಸಂತೋಷದಿಂದ ಬಾಳ್ವೆ ನಡೆಸಬೇಕು. ಆದರೆ ಒಮ್ಮೆ "ಏನು ನೀವು ಕನ್ನಡ ಕಲಿತುಕೊಳ್ಳಬೇಕು ಅಂದಾಗ ಆತ 'ನನಗೆ ಗೊತ್ತಿಲ್ಲ" ಎಂದ. ಕನ್ನಡ ದೇಶದಲ್ಲಿ ಇದ್ದ ಮೇಲೆ ಆ ಭಾಷೆ ಕಲಿಯಲೇ ಬೇಕು. ಈಗ ನನಗೆ ಗೊತ್ತಿಲ್ಲ ಎಂದರೆ? ಅದೇ ರೀತಿ ಕಲಿಯುವುದಕ್ಕೆ ಪ್ರಯತ್ನಮಾಡಿ ಎಂದಾಗ "ನನಗೆ ಬೇಕಿಲ್ಲ" ಎಂದ. ಆದರೆ ಈ ನೆಲದ ನೀರು, ಗಾಳಿ, ಅನ್ನ ಬೇಕು. ಆದರೆ ಭಾಷೆ ಬೇಡ ಅಂತ ಹೇಳುವುದು ಯಾವ ನ್ಯಾಯ?

ಧ್ವನಿ ೨ :-ನಮ್ಮಲ್ಲಿ ಹಾಗಂದಾಗ ನಾಲ್ಕು ಜನ ಕಲಿಯ ಬೇಕು ನೀನು ಹೇಳುವುದು ಸರಿಯಲ್ಲ ಅಂತ ಹೇಳಲಿಲ್ಲವೇ?

ಧ್ವನಿ ೧ :-ಅದೇ ಬಂದಿರುವುದು. ಹೋರಾಟ ಮಾಡುವ ವನು ಒಬ್ಬನೇ. ಅದರಿಂದ ಅದು ಸಫಲವಾಗದೇ ಇರಬಹುದು.

ಧ್ವನಿ ೨ :-ನೀವು ಹೇಳೋದು ಸರಿ. ಅಂಥದ್ದೇ ಇನ್ನೊಂದು ಘಟನೆ ಹೇಳ್ತೀನಿ ಕೇಳಿ. ಅವರು ಕನ್ನಡ ಚಳ ವಳಿಯ ಮುಖ್ಯಸ್ಥರೇ. ಒಮ್ಮೆ ಗ್ಯಾಸ್ ಅಂಗಡಿಗೆ ಹೊಸದಾಗಿ ಬೇರೆ ಬಡಾವಣೆಯಿಂದ ಬಂದಾಗ ಒಂದು ಪತ್ರವನ್ನು ಕನ್ನಡದಲ್ಲಿ ಮಾಡಿಸಿಕೊಂಡು

ಹೋಗಿ ಕೊಟ್ಟರಂತೆ. ಅಂಗಡಿಯಾತ ಇದು ನನಗೆ ತಿಳಿಯೋಲ್ಲ ಅಂದ. ಅವರು ಇಂಗ್ಲೀಷಿನಲ್ಲಿ ವಿವರಿಸ್ತೀನಿ ಅಂದ್ರೂ ಕೇಳಲಿಲ್ಲ. "ಆದ್ರೆ ನೀವು ಕನ್ನಡ ದೇಶಕ್ಕೆ ಬಂದಿದ್ದೀರಿ. ಸ್ವಲ್ಪ ಕನ್ನಡವನ್ನು ಕಲಿತು ಕೊಳ್ಳಬೇಕು" ಎಂದರು ಮತ್ತೆ ಆತನನ್ನುದ್ದೇಶಿಸಿ ಆತ ಹೇಳಿದ 'ನನಗೆ ಬೇಕಿಲ್ಲ ನಾನು ಇಂಡಿಯನ್.' "ಒಪ್ತೀನಿ, ಈ ನಾಡಿನಲ್ಲಿದ್ದಾಗ ಈ ಭಾಷೆಯನ್ನೂ ಕಲಿತಿರಬೇಕು." 'ನನಗೆ ಬೇಕಿಲ್ಲ' ಎಂದಾಗ ಅವರಿಗೆ ಕೋಪವೇರಿತು. ಪೋಲೀಸ್ ಸ್ಟೇಷನ್‌ಗೆ ಹೋಗಿ ದೂರು ಕೊಟ್ಟರು.. ಪೋಲೀಸಿನವರು ಬಂದರು. 'ಬೇರೆ ದೇಶದಿಂದ ಬಂದು ವ್ಯಾಪಾರ ಮಾಡಿ ಜೀವನ ಮಾಡಬೇಕು, ಭಾಷೆ ಕಲಿಯೋಕ್ಕೆ ಆಗೋಲ್ವೇ?' ಎಂದು ದಬಾಯಿಸಿದಾಗ ಅವರಲ್ಲಿ ಕ್ಷಮಾಪಣೆ ಕೇಳಿ, ಕನ್ನಡದಲ್ಲಿ ಬೋರ್ಡು ಬರೆಯಿಸುವ ಭರವಸೆಯನ್ನು ನೀಡಿದ ಅಂತಿಟ್ಕೊಳ್ಳಿ.

ಧ್ವನಿ ೧ :–ನಿಜ ನೀವು ಹೇಳಿದಂತೆ ಯಾರೂ ಬೇರೆ ಭಾಷೆಯ ಬಗೆಗೆ ದ್ವೇಷಮಾಡಬಾರದು. ಎಲ್ಲರೂ ಎಲ್ಲಾ ಭಾಷೆಯನ್ನೂ ಪ್ರೀತಿಸಬೇಕು. ಕಲಿಯಲು ಪ್ರಯತ್ನ ಮಾಡಿದರೆ ಒಳ್ಳೆಯದು.

ಧ್ವನಿ ೨ :ಕೆಲವರು ಇದ್ದಾರೆ. ಇಲ್ಲ ಅಂತ ಹೇಳೋದಿಲ್ಲ. ಕೆಲವರು ಬೇಗ ಭಾಷೆ ಕಲಿತುಕೊಂಡು ಮಾತಾ

ಡ್ತಾರೆ. ಆಗ ಅವರ ತೊದಲ ಮಾತು ಮಕ್ಕಳ ಮಾತು ಕೇಳಿದಷ್ಟು ಆನಂದ ತರುತ್ತದೆ.

ಧ್ವನಿ ೧ :-ಹೌದು.

ಧ್ವನಿ ೨ :-ಮನುಷ್ಯ ಆದಷ್ಟು ಭಾಷೆ ಕಲಿತರೆ ಒಳ್ಳೆಯದು. ಬೇರೆ ಬೇರೆ ರಾಜ್ಯ ತಿರುಗಿ ಅಲ್ಲಿನ ಸಂಸ್ಕೃತಿ ಸಾಹಿತ್ಯದ ಬಗೆಗೆ ತಿಳಿದುಕೊಳ್ಳಲು ಸಹಾಯ ವಾಗುತ್ತದೆ.

# ೨. ಇಂದಿನ ಹಳ್ಳಿ

ಧ್ವನಿ ೧ :-ಓ....ನೀವಾ....ಬನ್ನಿ....ಬನ್ನಿ....

ಧ್ವನಿ ೨ :-ಅಬ್ಬಬ್ಬಾ ಬಿಸಿಲು ಶುರುವಾಗೋಯ್ತು....ಸೆಕೆ ನೋಡಿ ಹ್ಯಾಗಿದೆ?

ಧ್ವನಿ ೧ :-ಬಿಸಿಲಿಗೆ ನೀವು ಈಗ್ಲೇ ಇಷ್ಟೊಂದು ಕಪ್ಪಾಗಿರುವಂತೆ ಕಾಣುತ್ತೆ. ನಿಮ್ಮನ್ನ ಪತ್ತೆ ಹಚ್ಚಲಿಕ್ಕೆ ಆಗಲಿಲ್ಲ.

ಧ್ವನಿ ೨ .-ಸ್ವಲ್ಪ ಹಳ್ಳಿ ಕಡೆ ಹೋಗಿದ್ದೆ. ಬಿಸಿಲಿನಲ್ಲಿ ತಿರುಗಾಟ ಅಂದ ಮೇಲೆ ಹಿಂದಿನ ಬಣ್ಣ ಎಲ್ಲಿ ಬರುತ್ತೆ ಬಿಡಿ.

ಧ್ವನಿ ೧ :-ಹಳ್ಳಿ ಅಂದ ಮೇಲೆ ನನಗನ್ನಿಸುತ್ತೆ. ಒಳ್ಳೆ ಶಾಂತವಾದ ಜೀವನ ಮಾಡಬಹುದು ಅಂತ.

ಧ್ವನಿ ೨ :-ಅಲ್ಲಾ ಸ್ವಾಮಿ ಎಲ್ಲಿ ತಾನೇ ಶಾಂತಿ ಸಿಗುತ್ತೆ ಹೇಳಿ, ಅವೆಲ್ಲಾ ನಾವು ಮಾಡಿಕೊಂಡ ಹಾಗೆ, ಹಳ್ಳಿ ಏನು ಸ್ವರ್ಗ ಅಂತ ತಿಳ್ಕೊಂಡಿದ್ದೀರೇನು? ಅಲ್ಲೂ ನಾನಾ ರೀತಿ ಜನಗಳಿದ್ದಾರೆ, ಹೋರಾಟದ ಜೀವನ ನಡೆಸ್ತಿದ್ದಾರೆ.

ಧ್ವನಿ ೧ :-ಏನೇ ಆಗಲೀ ಅವರು ಒಂದು ರೀತಿ ಮುಗ್ಧರು; ಪರೋಪಕಾರಿಗಳು.

ಧ್ವನಿ ೨ :-ನಿಮ್ಮ ಕಲ್ಪನೆ ಶುದ್ಧ ತಪ್ಪು, ಹೋಗಿ ನೋಡಿದಾಗ ಗೊತ್ತಾಗುತ್ತೆ, ಅಲ್ಲೂ ಕೂಡ ಎಲ್ಲಾ ರೀತಿಯ ಜನಗಳೂ ಇರ್ತಾರೇ ಅಂತ.

ಧ್ವನಿ ೧ :-ಇದು ನಿಮ್ಮ ಇತ್ತೀಚಿನ ಅನುಭವವೇನು?

ಧ್ವನಿ ೨ :-ಹೌದು ಪಟ್ಟಣದಿಂದ ಹಳ್ಳಿಗೆ ಹೋಗಿ ಅದರಲ್ಲೂ ಹೊಸದಾಗಿ ಹೋಗಿ ಒಂದು ವ್ಯಾಪಾರ, ವ್ಯವಹಾರ ಮಾಡಬೇಕಾದ್ರೆ ಎಷ್ಟೊಂದು ಚಿತ್ರ ಹಿಂಸೆ ಕಿರಿ ಕಿರಿ ಅಂತೀರಾ?

ಧ್ವನಿ ೧ :-ಏನು ನಿಮ್ಮ ಅನುಭವ?

ಧ್ವನಿ ೨ :೨-ಹೀಗೆ ನಮ್ಮ ಸ್ವಂತದವರ ಕೆಲಸ, ಗದ್ದೆ ಆರಂಭ ಅಂದಮೇಲೆ ಪಟ್ಟಣದಲ್ಲಿರೋದು, ಹಳ್ಳಿಲೋಗಿ ಮಾಡಲಿಕ್ಕಾಗುತ್ಯೇ?

ಧ್ವನಿ ೧ :-ಆಗದೇ ಏನು?

ಧ್ವನಿ ೨ :-ಅದೇ ನೀವು ತಪ್ಪು ತಿಳಿದುಕೊಂಡಿರೋದು. ಜನರು ಸಹಕಾರ ನೀಡಿದ್ರೆ ಪರ್ವಾಗಿಲ್ಲ. ಮೊದಲನೆಯದಾಗಿ ಅವರ ಸ್ವಂತ ಸೊಮ್ಮಿನವರಿಗೇ ಹೊಟ್ಟೆ ಉರಿ. ಆ ಊರಿನವರನ್ನು ಎತ್ತಿ ಕಟ್ಟುವುದು. ಈ ಹೊತ್ತಾಗೋಲ್ಲ, ನಾಳೆ ಆಗೋಲ್ಲ ಅಂತ ಅ ಸೋದು, ಹೆಚ್ಚಿಗೆ ಹಣ ಕೊಡಲಿ ಅಂತ ಕೇಳೋದು, ಇನ್ನೂ ಏನೇನೋ ಮಾತಾಡ್ತಾರೆ

ಧ್ವನಿ ೧ :-ಹಣ ಒಂದು ಸುರಿದ್ರೆ ಸರಿ ಕೆಲಸ ಆಗುತ್ತೆ. ಆಗ ಯಾರ ಮಾತು ಯಾರು ಕೇಳ್ತಾರೆ?

ಧ್ವನಿ :-ಅದೇನೋ ನಿಜ. ಹಾಗನ್ಬುಟ್ಟು ಒಂದಕ್ಕೆರಡು ಕೊಟ್ಟು ಮಾಡಿಸಲಿಕ್ಕಾಗುತ್ಯೇ? ಆದಕ್ಕಿಂತ ಆಸ್ತೀನಾ ಮಾರಿಬಿಟ್ಟು ಬ್ಯಾಂಕಿನಲ್ಲಿ ಫಿಕ್ಸೆಡ್ ಇಟ್ಟು ಅದರ ಬಡ್ಡಿಯಲ್ಲಿ ಜೀವನ ಮಾಡಬಹುದ ಗಂಡಸು ಅನ್ನುವವರು ಮನೆಯಲ್ಲಿ ಇಲ್ಲ ಅಂದ ಮೇಲೆ ಹೆಣ್ಣು ಬೇರೆಯುವರನ್ನು ಆಶ್ರಯಿಸಿ ಮಾಡಿಸಬೇಕಾದ್ರೆ ಬಹಳ ಕಷ್ಟ ಬಿಡಿ.

ಧ್ವನಿ ೧ :-ಅದೇನೋ ನಿಜ ಬಿಡಿ.

ಧ್ವನಿ ೨ :-ವ್ಯವಸಾಯ ಅಷ್ಟೊಂದು ಸುಲಭವಲ್ಲ ಅದಕ್ಕೆ ತಕ್ಕ ಗೊಬ್ಬರ ಹಾಕಬೇಕು, ದನಗಳನ್ನು ಸಾಕಬೇಕು, ನೀರು ಕಟ್ಟಬೇಕು, ಕಾಲ ಕಾಲಕ್ಕೆ ಸರಿಯಾಗಿ ಕೆಲಸ ಮಾಡಬೇಕು, ಕೈಲಿ ಹಣ ಇರಬೇಕು ಇಷ್ಟೆಲ್ಲಾ ಆದಮೇಲೆ ಬೆಳೆ ಸರಿಯಾಗಿ ಗೊಬ್ಬರ ಹಾಕದೇ ಹೋದ್ರೇ ಬೆಳೆ ಏನು ಬ ಯುತ್ತೆ? ಹಾಕಬೇಕು, ತೆಗೆದುಕೊಳ್ಳಬೇಕು ಕಾಲ ಕಾಲಕ್ಕೆ ಗೊಬ್ಬರ ಗೋಡು ನೋಡಬೇಕಾಗುತ್ತೆ. ಹತ್ತಾರು ಸಾರಿ ತಿರುಗಾಡಬೇಕಾಗುತ್ತೆ. ಜೊತೆಗೆ ಕೆಲಸಗಾರರ ಕೊಂಡತೆ, ಅವರ ಮನೋಭಾವ

ನೋಡಿದ್ರೆ ಗದ್ದೆ ಹೊಲ ಮಾಡ್ಬೋದೆ ಬೇಡ ಅನ್ನಿಸುತ್ತೆ.

ಧ್ವನಿ ೧ :-ಬೇಜಾರು ಮಾಡಿಕೊಂಡ್ರಾಗುತ್ತಾ? ಅದನ್ನೂ ಮಾಡ್ತೀನಿ ಅಂತ ಹೋದಾಗ ಆಯಲಡ್ಡಕ್ಕೆ ಕೇಳ್ತಾರೆ ಮಾರಲಿಕ್ಕಾಗುತ್ತಾ?

ಧ್ವನಿ ೨ :-ಅದೇ ಬಂದಿರೋದು ನೋಡಿ, ಏನೊ ಹೇಳ್ತೋಲ್ವೇ? ಹಾವೂ ಸಾಯೋಲ್ಲ ಕೋಲೂ ಮುರಿಯೋಲ್ಲ ಅಂತ. ಇಷ್ಟೆಲ್ಲಾ ಕಷ್ಟಬಿದ್ದು ಮಾಡಿದ್ರೂ ನಾವು ಹಾಕಿದ ಅಸಲಿಗೆ ಲಾಭ ಬರುತ್ತೆ ಅನ್ನೋ ಖಾತ್ರಿ ಇಲ್ಲ. ನೀರಾವರಿ ನಾಲಾ ಬೈಲಾದ್ರೆ ಪರವಾಗಿಲ್ಲ. ಹೊಲವಾದ್ರೆ ದೇವ್ರೇ ಗತಿ, ಮಳೆ ಬಿದ್ರೆ ಊಟು. ಇಲ್ಲದೇ ಹೋದ್ರೆ ಅಸಲಿಗೂ ನಾಮ.

ಧ್ವನಿ ೧ :-ಯಾವುದಕ್ಕೂ ಮಳೆರಾಯನ ಕೃಪೆ ಬೇಕು.

ಧ್ವನಿ ೨ .-ಹಳ್ಳಿ ಜನರು ಸುಮ್ಮನೆ ಕಟ್ಟೆಮೇಲೆ ಕೂತು ಆವರಿವರ ಮಾತಾಡ್ಕೊಂಡು ಬೀಡಿ ಸೇದ್ಕೊಂಡು ನಿದ್ರೆ ಹೊಡೆದ್ರೂ ಕೆಲಸ ಇದೆ ಬನ್ನಿ ಅಂದಾಗ ಬೇಡ ಅಂತಾರೆ. ಕೆಲವರು ಕುಡಿದು ಲೋಲಾಪತಿಯಾಗಿ ಒದ್ದಾಡ್ತಾ ಇರ್ತಾರೆ. ಆದ್ರೆ ಕೂಲಿ ಮಾಡಲಿಕ್ಕೆ ಇಷ್ಟವಿಲ್ಲ. ಇದರ ಜೊತೆ ಮಾಡುವವರನ್ನು ತಪ್ಪಿಸೋದು. ಅಡ್ವಾನ್ಸ್ ಕೊಡಿ ಅನ್ನೋದು. ಆಮೇಲೆ

ಕೈಕೊಡೋದು ಈ ಹೊತ್ತಾಗೋಲ್ಲ, ನಾಳೆ ಒರ್‍ತೀವಿ ಅನ್ನೋದು. ಅವರು ಆಡೋದು ಒಂದೇ ಎರಡೇ ಹಲವಾರು. ಹೀಗೆ ಕೂತಿದ್ರೆ ದನಗಳಿಗೆ ಕಾಲು ಬಾವಿ ಜ್ವರದವರು ಒಂದು ಡಂಗೂರ ಸಾರಿಸಿ ಕರೆದ್ರೆ ಬರಲಿಕ್ಕೆ ಅನುಮಾನ. ದನಗಳನ್ನು ಅಟ್ಟಿಕೊಂಡೋಗ್ತಿದ್ದವರನ್ನು ಕರೆದ್ರೆ "ಬರ್‍ತೀವಿ ಸ್ವಾಮಿ" "ಬ್ಯಾಡಪ್ಪ" ಎನ್ನುವುದು. ಉಚಿತವಾಗಿ ಕೊಡ್ತೀವಿ ಅಂದ್ರೂ ಒಪ್ಪಿಗೆ ಇಲ್ಲ. ದನಗಳಿಗೆ ಗುರುತು ನಿಂತುಬಿಡ್ತವೆ; ಗ್ರೈಮೆ ಮಾಡಕ್ಕಾಗಲ್ಲ ಅನ್ನುವುದು.

ಧ್ವನಿ ೧ :–ಹಳ್ಳಿ ಜನರಲ್ಲಿ ಏನೇನು ಬದಲಾವಣೆ?

ಧ್ವನಿ ೨ :–ದಿನ ದಿನಕ್ಕೂ ಬದಲಾವಣೆ ಆಗ್ತಾನೆ ಇರುತ್ತೆ. ಅವರೂ ಅಷ್ಟೇ ತಾನೇ ಬೆಳೆದರೂ ಹಣ್ಣು ತರಕಾರಿ ಬೆಲೆ ಪಟ್ಟಣಕ್ಕಿಂತ ಹೆಚ್ಚು ಹೇಳ್ತಾರೆ. ಬಿಗಿ ಎಷ್ಟು?

ಬಿಗುಮಾನ ಎಷ್ಟು? ಒಂದೇ ವಿಷಯದಲ್ಲಿ ಅಂತ್ಲೇ ಅಲ್ಲ. ಎಲ್ಲಾದ್ರಲ್ಲೂ ಚುರುಕು ತುಂಬಾ ವ್ಯವಹಾರ ಜ್ಞಾನಸ್ಥರು. ಯಾವುದೇ ವ್ಯಾಪಾರ ಮಾಡುವಾಗ ಥಳಕು ಮಾಡಿ ಬಿಗಿಯಾಗಿದ್ದು ಅದ್ರಿಂದ ಉಪಯೋಗವಿಲ್ಲ ಅಂತ ಕಮ್ಮಿಗೆ ಕೇಳೋದು. ತಾವು ಕೊಡುವಾಗ ಅಷ್ಟು ಕಮ್ಮಿಗೆ ಕೊಡೋಲ್ಲ

ಅಂತ ಹೇಳುವುದು, ಹೊಸದಾಗಿ ಊರಿಗೆ ಬಂದರೆ ಮೊದಲೇ ಗಾದೆ ಹೇಳೋಲ್ವೆ 'ಪರಸ್ಥಳವೋ ಪರ ದಾಟವೋ' ಅಂತ ಹಾಗೆ ಮಾಡಿಬಿಡ್ತಾರೆ, ಆಟ ಆಡಿಸ್ತಾರೆ, ತಮಾಷೆ ಮಾಡ್ತಾರೆ ಗದ್ದೆಯಲ್ಲಿದ್ದ ಮರ ತರಿಸ್ತಾ ಇದ್ರೆ ಹೇಳದೇ ಕೇಳದೇ ಸೌದೆ ಎತ್ತಿ ಕೊಂಡು ಹೋಗುವುದು. 'ಏನು ಕೇಳಬಾರದೇ?' ಅಂದರೆ 'ನೀವಿದ್ದೀರಲ್ಲಾ ಅಂತ ಎತ್ತಿಕೊಂಡೆ' ಅನ್ನೋದು. ಕೆಲವರು 'ನೀವಿಲ್ಲ ಅಂತ ಎತ್ತಿ ಕೊಂಡೆ', 'ಏನೋ ಸ್ವಲ್ಪ ಕೊಡಿ ಸ್ವಾಮಿ' ಅನ್ನು ವುದು. ಬೇರೆಯವರ ಮೆದೆಯ ಹುಲ್ಲ ಮೇಯಿಸಿ ಕೊಳ್ಳುವುದು, ಗದ್ದೆಗೆ ಬಿಟ್ಟು ಮೇಯಿಸುವುದು ಮಾಡ್ತಾನೆ ಇರ್ತಾರೆ.

ಧ್ವನಿ ೧ :-ಅಂತೂ ಹಳ್ಳಿಯ ಅನುಭವ ಜೋರು.

ಧ್ವನಿ ೨ :-ಹಳ್ಳಿಯಾದರೇನು? ಪಟ್ಟಣವಾದರೇನು? ಎಲ್ಲಾ ಒಂದೇ. ನಾವು ಬಾಳುವುದರಲ್ಲಿ, ನಡೆದು ಕೊಳ್ಳುವುದರಲ್ಲಿ ಇರೋದು ಅನ್ನಿಸುತ್ತೆ. ಎಲ್ಲವೂ ನಮ್ಮ ಕೈಲಿದೆ.

o o o

## ೩. ಬದಲಾವಣೆ

ಧ್ವನಿ ೧ - ಯಾಕೆ ಒಂದು ಥರಹ ಮೆತ್ತಗಿದ್ದೀರಿ ?

ಧ್ವನಿ ೨- ನೋಡಿ, ಯಾವಾಗಲೂ ಆರೋಗ್ಯ ಚನ್ನಾಗಿದ್ರೆ ಜೋರು, ಜೂರತ್ತು ಎಲ್ಲಾ ಬರ್ತಾವೆ ನೋಡಿ. ವಯಸ್ಸು ಮುಖ್ಯವಲ್ಲ, ಮನುಷ್ಯ ಹಾರಾಟ ಚೀರಾಟ, ಹಮ್ಮು-ಬಿಮ್ಮು ತೋರಿಸುವುದು, ವರ್ತನೆಯಲ್ಲಿ ನರ್ತನ ಮಾಡುವುದು ಮೂವತ್ತ ರಿಂದ ನಲವತ್ತರವರೆಗೆ. ಆಮೇಲೆ ಮೆತ್ತಗಾಗ್ತಾನೆ. ಆಧ್ಯಾತ್ಮದತ್ತ ಒಲ್ತಾನೆ. ಅದರಲ್ಲಿ ಕೆಲವರು ಮಾತ್ರ ಇಲ್ಲ ಬಿಡಿ. ಅಲ್ಲಿಯವರೆಗೆ ಸಂಸಾರ, ಮಕ್ಕಳು, ಮರಿ, ಜೊಂಜಾಟ, ಇದರಲ್ಲೆಲ್ಲಾ ತೇಲಿ ಮುಳುಗಿ ಸಾಕಪ್ಪಾ ಅನ್ನಿಸ್ಬಿಟ್ಟಿರುತ್ತೆ.

ಧ್ವನಿ ೧-ಚಿಕ್ಕ ಸಂಸಾರವಿದ್ದು ಒಂದೆರಡು ಮಕ್ಕಳಿದ್ರೆ ಬರೋ ಸಂಬಳದಲ್ಲಿ ಸುಖವಾಗಿ ನೆಮ್ಮದಿಯಾಗಿರ ಲಿಕ್ಕಾಗೋಲ್ವೇ ?

ಧ್ವನಿ ೨- ಎಲ್ಲರಿಗೂ ಎಲ್ಲಿರುತ್ತೆ? ಹೆಚ್ಚಿಗೆ ಸಂಬಳ ಇರುತ್ತೆ. ಮಿಕ್ಕ ಸಂಸಾರದ ಭಾರ. ಅಕ್ಕ, ತಂಗಿ, ಅಣ್ಣ, ತಮ್ಮ, ಜವಾಬ್ದಾರಿ ಇರುತ್ತೆ. ಕೆಲವರು ಹಿರಿಯ ಮಗನಾಗಿ ಸಂಸಾರದ ಜವಾಬ್ದಾರಿಯನ್ನು ಹೊತ್ತು

ಕುಸಿಯುತ್ತಾರೆ. ಆದರೆ ಕೆಲವು ದುರದೃಷ್ಟಿಗಳು ಚಿಕ್ಕ ಮಗನಾಗಿ ಹುಟ್ಟಿಯೂ ಅನುಭವಿಸಬೇಕಾಗುತ್ತೆ. ಅದಕ್ಕೂ ಪಡೆದುಕೊಂಡು ಬಂದಿರಬೇಕು. ನಾವು ಪ್ರಪಂಚದಲ್ಲಿ ಹುಟ್ಟಿದಮೇಲೆ ಮನುಷ್ಯರಾಗಿರಬೇಕು. ಬರೀ ಸಮ್ಮದಷ್ಟೇ ಸುಖ ನೋಡೋದಲ್ಲ, ತಾಯಿತಂದೆ, ಅಕ್ಕ, ತಂಗಿ, ಅಣ್ಣ ತಮ್ಮಂದಿರು ಕಷ್ಟಸುಖದಲ್ಲಿ ಭಾಗವಹಿಸಬೇಕಾಗುತ್ತೆ

ಧ್ವನಿ ೧– ಅದೇನೋ ನಿಜ ಅನ್ನಿ.

ಧ್ವನಿ ೨ – ಪತ್ತಗಾಗ್ಬಿಟ್ರೆ ಅಂಡದ್ಕೇಳ್ತೀನಿ, ಮನುಷ್ಯ ಒಂದು ಮೂರ್ತಿ ಇದ್ದಹಾಗೆ. ಹತ್ತಾರು ಪೆಟ್ಟು ಬಿದ್ದು ಆ ಮೂರ್ತಿ ಆಗಬೇಕು ಸಂಸಾರವನ್ನು ನಿಭಾಯಿಸಿ, ಕಷ್ಟ ಸುಖಗಳಲ್ಲಿ ಈಜಿ, ಪರಿಪೂರ್ಣ ಅಂತ ಹೇಳಲಿಕ್ಕಾಗೋಲ್ಲ. ಈ ಪ್ರಪಂಚ ಅಂದ್ರೆ ಇಷ್ಟೇ ಅಂತಿರ್ತಾನೆ.

ಧ್ವನಿ. ೧– ಇದೇನು ಈಹೊತ್ತು ಆಧ್ಯಾತ್ಮ ಹೇಳುವಂತಿದೆ.

ಧ್ವನಿ ೨– ಹಾಗಲ್ಲ ಅದು ಒಂದು ರೀತೀಲಿ ಮನುಷ್ಯನ ಜೀವನದಲ್ಲಿ ನೆಮ್ಮದಿ ಶಾಂತಿ ದೊರೆಯುತ್ತೆ ಅಂತ ಹೇಳಬಹುದು. ಮನುಷ್ಯನಿಗೆ ಹಣ, ಕೀರ್ತಿ, ಅಧಿಕಾರ, ಇವೆಲ್ಲಾ ಇದ್ದಾಗ ತಾನುಂಟೋ ಮೂರು ಲೋಕ ಉಂಟೋ ಅಂತ ಮೆರೀತಾನೆ.

ರಕ್ತದ ಕಾವಿನಲ್ಲಿ, ಯೌವನದ ಮದದಲ್ಲಿ ತಾನು ಆಡಿದ್ದೇ ಆಟ, ಹೂಡಿದ್ದೆ ಲಗ್ಗೆ ಅಂತಿರ್ತಾನೆ. ತನ್ನ ಬಿಟ್ಟ ಮೇಲೆ ಬೇರಿಲ್ಲ ; ನಾನು, ನಾನತ್ವ ಎಂಬುದು ತಾಂಡವವಾಡ್ತಾ ಇರುತ್ತೆ. ಆದನ್ನೇ ಅಷ್ಟ ಮದ ಗಳು ಅಂತ ಹೇಳೋದು. ರೂಪ, ಯೌವ್ವನ, ವಿದ್ಯೆ, ಅನ್ನ ಮುಂತಾದುವುಗಳು ಮನುಷ್ಯನ ತಲೆ ಯನ್ನು ನೆಟ್ಟಗೆ ನಿಲ್ಲುವಂತೆ ಮಾಡುವುದಿಲ್ಲ. ತನ್ನ ಲೋಕದಲ್ಲೇ ವಿಹರಿಸ್ತಾನೆ. ಇದನ್ನು ನಾವು ಪ್ರತಿ ದಿನವೂ ನೋಡ್ತಾನೇ ಇರ್ತೇವೆ. ಒಬ್ಬ ವ್ಯಕ್ತಿ ಮೊದಲು ಒಂದು ಸಣ್ಣ ಕೆಲಸದಲ್ಲಿ ಪರಕು ಪರಕಾಗಿ ಬಟ್ಟೆ ಹಾಕಿಕೊಂಡು ಇದ್ದ. ಆ ವ್ಯಕ್ತಿಗೆ ಒಂದು ಬಡ್ತಿ ಬಂದು ದೊಡ್ಡ ಅಧಿಕಾರಿ ಆದಕೂಡಲೇ ಆತನ ವೇಷಭೂಷಣಗಳು ಬದಲಾದುವು. ಹೌದು, ಮನುಷ್ಯ ದಿನದಿನಕ್ಕೆ ಬದಲಾಗಬೇಕು. ಡಾರ್ವಿನ್‌ನ ವಿಕಾಸವಾದದಂತೆ ನಿಜ ಜೀವನದಲ್ಲಿ ಕಾಲಕ್ಕೆ ತಕ್ಕ ಬದಲಾವಣೆ ಆಗಬೇಕು. ಮನುಷ್ಯ ಬಟ್ಟೆಯಲ್ಲಿ, ಮಾತಿನಲ್ಲಿ, ನಡವಳಿಕೆಯಲ್ಲಿ, ವರ್ತನೆಯಲ್ಲಿ ಬಹಳ ಬದಲಾಗುವುದನ್ನು ಕಾಣಬಹುದು. ಆದ್ರೆ ಆತ, "ಹಿಂಪಿನದನ್ನು ನೆನಕೋ, ಹಿಮ್ಮಡಿ ಕೊಳೆ ತೊಳೆ ದುಕೋ." ಅಂತ ತಿಳಿದುಕೊಳ್ಳಬೇಕು. ಹಮ್ಮಿ ನಿಂದ ಬ್ರಹ್ಮ ಕೆಟ್ಟ ಅಂತ ಹೇಳೋದು ಉಂಟು.

ಮನುಷ್ಯ ಯಾವಾಗಲೂ ಒಂದೇ ಸಮನಾಗಿರ ಬೇಕು ಜೀವನದಲ್ಲಿ ಸುಖ ಒಂದೇ ಶಾಶ್ವತವಲ್ಲ. ಮಧ್ಯೆ ಮಧ್ಯೆ ಕಷ್ಟವೂ ಬರುತ್ತೆ. ಎರಡನ್ನೂ ಅನು ಭವಿಸುವ ಶಕ್ತಿ ಬರಬೇಕು ಅದು ಪ್ರತಿಯೊಬ್ಬ ರಿಗೂ ಗೊತ್ತು ಆದ್ರೂ ತಲೆ ನಿಲ್ಲೋಲ್ಲ. ನಾನತ್ವ ಹಾಗೆ ಆಡುವಂತೆ ಮಾಡುತ್ತೆ. ಎಷ್ಟೋ ಜನ ಹೀಗೆ ಆಡಿ ಆಮೇಲೆ ಪರಿವರ್ತನೆ ಹೊಂದಿ ಸರಳ ಜೀವನಕ್ಕೆ ಇಳಿಯಲಿಲ್ಲ ? ದೊಡ್ಡವರ ಚರಿತ್ರೆ ಗಳನ್ನು ನಾವು ಓದಿದಾಗ ನಮಗೆ ಅದರ ಅರಿವಾಗುತ್ತೆ.

ಧ್ವನಿ ೧ :- ಹೌದು ಯಾವಾಗಲೂ ತುಂಬಿದ ಕೊಡ ತುಳುಕುವುದಿಲ್ಲ, ಖಾಲಿ ಕೊಡ ಹೆಚ್ಚಿಗೆ ಶಬ್ದ ಮಾಡುತ್ತೆ ಅಂತ ಅದ್ಕೇ ಹೇಳೋದು.

ಧ್ವನಿ ೨ .- ಸರಿಯಾಗಿ ಹೇಳಿದ್ರಿ ಬಿಡಿ. ಇವನ್ನೆಲ್ಲಾ ನಾವು ದಿನ ನಿತ್ಯ ನೋಡ್ತಾನೇ ಇರ್ತೀವಿ. ಮನುಷ್ಯರು ಅಧಿಕಾರವೇ ಮುಂತಾದ ಅಷ್ಟ ಮದಗಳಲ್ಲಿ ಮುಳುಗಿರುವವರು ಊಸರವಳ್ಳಿಯಂತೆ ಬಣ್ಣ ಬದಲಾಯಿಸ್ತಾನೇ ಇರ್ತಾರೆ.

ಧ್ವನಿ ೧ :- ಒಂದು ರೀತಿಯಲ್ಲಿ ಹೇಳುವುದಾದರೆ ಡಂಬಾ ಚಾರಕ್ಕೆ ಒಳಗಾಗ್ತಾರೆ, ಡಬಡ್ಡಾಳಿಕೆ ತೋರಿ ಸ್ತಾರೆ. ಆದನ್ನು ನಾವು ದಿನನಿತ್ಯ ಒಂದಲ್ಲ ಒಂದು

ನೋಡ್ತಾನೇ ಇರ್ತೀವಿ. ಆದ್ರೆ ಒಂದು ಮಾತು ಸತ್ಯ. ಮನುಷ್ಯ ಯಾವಾಗಲೂ ಅದಕ್ಕೆ 'ಆರಕ್ಕೆ ಏರಬಾರದು, ಮೂರಕ್ಕೆ ಇಳಿಯಬಾರದು'. ತೂಗಿ ಬಿಟ್ಟ ತೊಲೆಯಂತೆ ಗಂಭೀರವಾಗಿರಬೇಕು. ಅತಿ ಹಿಗ್ಗು ಯಾವಾಗಲೂ ಒಳ್ಳೆಯದಲ್ಲ. ಮನುಷ್ಯ ಒಂದೇ ಸಮನಾಗಿ ನಡೆದುಕೊಂಡು ಹೋಗಬೇಕು. ಕೆಲವರು ದೊಡ್ಡ ಕೆಲಸಕ್ಕೆ ಹೋದಮೇಲೆ ನಮಸ್ಕಾರ ಅಂದ್ರೂ ಬರೇ ಕತ್ತಿನ ವ್ಯಾಯಾಮ ಮಾಡುವವರಿಗೇನೂ ಕಡಿಮೆ ಇಲ್ಲ. ಹೀಗೇ ಹೇಳ್ತಾ ಹೋದ್ರೆ ಇದಕ್ಕೆ ಪೂರ್ಣವಿರಾಮವೇ ಇಲ್ಲ.

## ೪. ಆಷಾಢ

ಧ್ವನಿ ೧ —: ಬನ್ನಿ....ಬನ್ನಿ....ಅಂತೂ....

ಧ್ವನಿ ೨ :- ಆಷಾಢ ಮಾಸದ ಗಾಳಿ ಬಂತು ಅನ್ನಿ

೧ :- ಯಾಕೆ ಹೀಗಂತೀರಿ ? ನಮ್ಮನ್ನೆಲ್ಲಾ ಗಾಳಿಗೆ ತೂರಿ ಬಿಡೋಣ ಅಂತ್ಲಾ ?

೨ :—ಗಾಳಿ ಬಂದಾಗ ಎಲ್ಲಾ ತೂರಿಕೊಳ್ಳಬೇಕಾದ್ದೆ.

೧ :-ಯಾಕೆ ಈ ಹೊತ್ತು ಗಾಳಿ ಸಮಾಚಾರಕ್ಕೆ ಆರಂಭ ಮಾಡಿಬಿಟ್ರಿ ?

೨ :- ಇನ್ನೇನು ಈ ಆಷಾಢ ಮಾಸದಲ್ಲಿ ಗಾಳಿ ತಾನೇ ವಿಶೇಷ.

೧ .- ಏನೂ ವಿಶೇಷವಿಲ್ಲದ ಮಾಸ ಅಂತಾರೆ ಜನಗಳು, ನೀವು ವಿಶೇಷ ಅಂತೀರಿ.

೨ :- ಯಾವ ತಿಂಗಳಲ್ಲಿ ವಿಶೇಷವಿಲ್ಲ. ಯಾವ ತಿಂಗಳಲ್ಲಿ ವಿಶೇಷವಿದೆ ಅಂತೇಳ್ತೀರಿ ? ಎಲ್ಲವೂ ಮಹತ್ವವಾದ ತಿಂಗಳುಗಳು, ದಿನಗಳು. ಬಸವಣ್ಣನವರು, ಶರಣರು ಎಲ್ಲರೂ ಹೇಳಿದ್ದಾರೆ. ನಮ್ಮ ಮನಸ್ಸೊಂದು ಸರಿಯಾಗಿದ್ರೆ ಘಳಿಗೆ ದಿನ ಏನೂ ಮಾಡೋಲ್ಲ. ಎಲ್ಲವೂ ಸುಸೂತ್ರವಾಗಿ ನಡೆಯುತ್ತದೆ ಅಂತ. ಇವೆಲ್ಲಾ ಯಾರೋ ಮಾಡಿದ್ದು ? ಅದು ಮೂಢ

ನಂಬಿಕೆಯಾಗಿ ಮುಂದುವರಿಯಿತು ಅಷ್ಟೇ. ರಾಹು ಕಾಲ, ಗುಳಿಕಾಲ ಅದೂ ಇದೂ ಅಂತ. ಗುಳಿಕಾಲ ದಲ್ಲಿ ಮಾಡಿದ ಕೆಲಸ ಎಷ್ಟು ಕೆಟ್ಟಿಲ್ಲ?

೧ :- ನಿಜವೇ ಅದ್ರೂ ನಮ್ಮ ಜನ ನಮ್ಮ ಸಂಪ್ರದಾಯ ಗಳನ್ನು ಮುರಿಯಕ್ಕೆ ಇಷ್ಟಪಡಲ್ಲ ನೋಡಿ.

೨ :- ಈಗ ಆಷಾಢ ಮಾಸದಲ್ಲಿ ಹೆಚ್ಚಿನವರು ಮದುವೆ ಮಾಡೋದೇ ಆಗ್ಲೀ, ಗುದ್ಲಿ ಪೂಜೆ ಮಾಡೋದೇ ಆಗ್ಲೀ, ಗೃಹ ಪ್ರವೇಶ ಮಾಡೋದೇ ಅಗ್ಲೀ ಮಾಡಲ್ಲ ಯಾವ ಶುಭ ಕಾರ್ಯವನ್ನೂ ಮಾಡಲ್ಲ. ಇದು ಶೂನ್ಯ ಮಾಸ ಅಂತ ಸ್ವಯಂ ಪ್ರೇರಿತರಾಗಿ ರಿಟೈರ್‌ಮೆಂಟ್ ತೆಗೆದುಕೊಳ್ಳೋವ್ರು, ಕೆಲಸಕ್ಕೆ ರಾಜೀನಾಮೆ ಕೊಡುವವರು ಎಲ್ಲರೂ ಆಷಾಢಮಾಸ ಅಂತ ನೋಡ್ತಾರೆ. ನೋಡಿ ಎಷ್ಟೋ ಜನಗಳಲ್ಲಿ ಆಷಾಢ ಮಾಸದಲ್ಲೇ ಮದ್ವೆ ಮಾಡಲಿಕ್ಕೆ ಬಹಳ ಪ್ರಶಸ್ತವಾದುದು ಅಂತ ಮಾಡ್ತಾರೆ. ಬೆಂಗಳೂರಿ ನಂಥ ದೊಡ್ಡ ದೊಡ್ಡ ಪಟ್ಟಣದಲ್ಲಿ ನಿಮಗೆ ಏನಾದ್ರೂ ಒಂದು ಕಾರ್ಯ ಮಾಡ್ತೀನಿ ಅಂದ್ರೂ ಛತ್ರ ಸಿಗೋಲ್ಲ. ಎಲ್ಲಾ ಬುಕ್ ಆಗಿರ್ತವೆ.

೧ :- ಹೌದು, ಅದನ್ನು ನಾನೂ ನೋಡಿದ್ದೇನೆ.

೨ :- ನೋಡಿ ಇನ್ನೂ ಅನೇಕ ರೀತಿಯ ಮೂಢನಂಬಿಕೆ ಗಳು ನಮ್ಮಲ್ಲಿವೆ. ಈ ಆಷಾಢ ಮಾಸದಲ್ಲಿ ಹೊಸ

ದಾಗಿ ಮದುವೆ ಆದ ದಂಪತಿಗಳ ವಿರಹವನ್ನು ನೋಡಲಿಕ್ಕಾಗುವುದಿಲ್ಲ. ಅದೇನೋ ಆ ಸಮಯ ದಲ್ಲಿ ಗಂಡು ಹೆಣ್ಣಿನ ಮನೆಗೆ ಹೋಗುವಂತಿಲ್ಲ. ಅತ್ತೆ ದಾಟಿದ ಹೊಸ್ತಿಲು ದಾಟಬಾರದು ಅಂತ ಏನೇನೋ ಹೇಳ್ತಾರೆ. ಆದ್ರೆ ನಾನು ಹೇಳೋದು ಇದೆಲ್ಲಾ ದೊಡ್ಡವರು ಮಾಡಿದ್ದು. ಗಂಡು ಹೆಣ್ಣು ಗಳಲ್ಲಿ ಹೆಚ್ಚಗೆ ಪ್ರೀತಿ ಹುಟ್ಟಲಿ, ನೋಡಬೇಕು, ಮಾತನಾಡಬೇಕು, ಎಂಬುದು ಹೆಚ್ಚಲಿ ಅಂತಿರ ಬೇಕು ಅಷ್ಟೇ ಎಷ್ಟೋ ಜನ ಪಕ್ಕದ ಮನೆಗೆ ಕರೆಸಿ ಮಾತ್ನಾಡೋದು, ಕರೆದುಕೊಂಡು ಹೋಗು ವುದನ್ನು ಮಾಡ್ತಾರೆ.

೧ :- ಹೌದು, ಅದೇನೋ ನಿಜ ಅನ್ನಿ, ಕಾಲ ಬದಲಾ ಗುತ್ತಾ, ಬದಲಾಗುತ್ತಾ ನಾವೂ ಕೂಡ ಬದಲಾಗ ಬೇಕು. ಹಳೆಯ ಕಂದಾಚಾರಗಳನ್ನು ಇಟ್ಟು ಕೊಂಡು ನಡೆದ್ರೆ ನಿಜವಾಗೂ ನಾವು ಮೂಢರು ಅಂತ್ಲೇ ಹೇಳಬೇಕು.

೨ :-ಅಷಾಢ ಮಾಸಕ್ಕೆ ಎಲ್ಲಾ ರೀತಿಯಲ್ಲೂ ಎಡವಟ್ಟೇ. ವ್ಯಾಪಾರಾನೂ ಕಡಿಮೆ ಚಿನ್ನದ ಬೆಲೆ ಕುಸಿ ಯುತ್ತೆ ಅಂತಾರೆ. ಯಾಕೆ ಅಂತೀರೋ ಮದುವೆ ಎಲ್ಲಾ ಮುಗಿಸಿ ಚಿನ್ನ ತೆಗೆದುಕೊಳ್ಳುವವರು ಕಡಿಮೆ. ಆದ್ಕೇ ಒಂದು ಸ್ವಲ್ಪ ಇಳಿಯುತ್ತೆ. ಈ

ಸಂದರ್ಭದಲ್ಲಿ ಸ್ವಲ್ಪ ಆಭರಣ ಮಾಡಿಸಿಕೊಳ್ಳು ವುದು ಹೆಚ್ಚು. ಆಷಾಢಮಾಸದ ಗಾಳಿ ನೆರೆ ಬರುವ ವೇಳೆ. ಮಳೆ-ಚಳಿ, ಬಿಸಿಲು ಬಯಸುತ್ತೆ ಮೈ ಕೈಗಳು. ಬೀಜ ಬಿತ್ತಿ ಆರಾಮವಾಗಿ ರೈತರು ಮನೆಯಲ್ಲಿ ಕೂತು ಸ್ವಲ್ಪ ಕಾಲ ಹಾಕಬಹುದು.

೧ :— ಈ ಆಷಾಢ ಮಾಸದಲ್ಲಿ ಊಟ ತಿಂಡಿಯೂ ಬೇಗ ಅರುಗತ್ತೆ ನೋಡಿ. ಎಷ್ಟು ತಿಂದ್ರೂ ಹೊಟ್ಟೆ ಲವಲವ ಅಂತಿರುತ್ತೆ. ಪ್ರವಾಸ, ಬೆಟ್ಟಗುಡ್ಡಗಳಿಗೆ ವಿಹಾರಕ್ಕೋದ್ರೆ ಇನ್ನೂ ಹೆಚ್ಚು ಹಸಿವು. ಖಾರ ಖಾರವಾಗಿ ಕರಿದ ತಿಂಡಿ ತಿನ್ನೋಣ ಅನ್ನಿಸುತ್ತೆ.

೨ :— ಹೌದು ನಿಜ. ಇದಲ್ಲದೆ ಆಗ್ಲೇ ಹೇಳಿದ್ನಲ್ಲ. ನವ ದಂಪತಿಗಳು ಹನಿಮೂನ್‌ಗೋಗುವ ಕಾಲ. ಬೆಟ್ಟ ಗುಡ್ಡಗಳನ್ನು ವಿಹರಿಸಿ ಆನಂದವಾಗಿ ಕಾಲ ಕಳೆ ಯುವ ತಿಂಗಳು ಇದು. ಮಳೆ ಬಿದ್ದು ಹಸುರೆದ್ದು ಪ್ರಕೃತಿ ಸೌಂದರ್ಯ ಕಣ್ಮನಗಳಿಗೆ ಆನಂದವನ್ನು ನೀಡುತ್ತದೆ. ಅಂಥ ಪ್ರಕೃತಿ ಮಧ್ಯೆ ಹೊಸದಾಗಿ ಮದುವೆಯಾದ ದಂಪತಿಗಳು ವಿಹರಿಸುವಾಗ ಎಷ್ಟೊಂದು ಸ್ವಾರಸ್ಯವಿರುತ್ತದೆ ಎಂಬುದು ಅನು ಭವಿಸಿದವರಿಗೇ ಗೊತ್ತು.

೧ :— ಈ ಹಳ್ಳಿಯವರು ಈ ಅಷಾಢ ಮಾಸದಲ್ಲಿ ಗಂಡು ಹೆಣ್ಣಿನ ಮನೆಗೆ ಬರಬಾರದು ಅಂತ ಹೇಳ್ತಾರಲ್ಲ ಯಾಕೆ ?

೨ :— ಏನಿಲ್ಲ. ಮನ್ವೆ ಆದವ್ರು ನಾನು ಈಗಾಗ್ಲೇ ಹೇಳಿದ, ಆಗಿನ ಕಾಲದಲ್ಲಿ ಚಿಕ್ಕಪುಟ್ಟ ವಯಸ್ಸಿಗೆ ಮದುವೆ ಮಾಡ್ತಿದ್ರು. ಗಂಡ ಹೆಂಡತಿಯ ಬಾಂಧವ್ಯ ಬೆಸೆಯಲಿಕ್ಕೆ ವಿರಹ ಸ್ವಲ್ಪ ಸಹಾಯವಾಗುತ್ತೆ ಅಂತ. ಆದರೆ ಇನ್ನೊಂದು, ಮದ್ವೆ ಆಗಿ ಪ್ರಸ್ತವಾಗಿದ್ದರೆ, ಈ ತಿಂಗಳಲ್ಲಿ ಸಾಮಾನ್ಯವಾಗಿ ಬೇಗನೆ ಗರ್ಭ ಧರಿಸಬಹುದು ಅಂತ ಕೆಲವರು ಹೇಳ್ತಾರೆ. ಅದನ್ನು ತಪ್ಪಿಸಿ ದಂಪತಿಗಳು ಕೆಲವು ಕಾಲ ಸಂತೋಷವಾಗಿ ಇರಲಿ ಎಂಬ ಮನೋಭಾವದಿಂದ್ಲೂ ಸಹ.

## ೫. ಗಲಭೆ

ಧ್ವನಿ ೧ :- ಅಂತೂ ಬಿಳಿಗಿರೀರಂಗನಬೆಟ್ಟ ನೋಡಿಕೊಂಡು ಆರಾಮವಾಗಿ ಬಂದ್ಯಲ್ಲಾ.

ಧ್ವನಿ ೨ :- ಅರಾಮ ಏನು ಬಂತು, ಅ ಕಥೆ ಕೇಳಿದ್ರೆ ಆಮೇಲೆ ನೀನೇ ಹೇಳ್ತೀಯೊ ಆರಾಮವೋ.... ಏನೋ ಅಂತ.

೧ :- ಅದೇನು ಹೇಳು ಮತ್ತೆ.

೨ :- ನೀನು ಹೇಳಿದಾಗೆ ಆನಂದವಾಗಿ ಬಿಳಿಗಿರಿರಂಗಯ್ಯನ ಬೆಟ್ಟ ನೋಡಿದೋ, ಬಿಳಿಗಿರಿ ರಂಗಯ್ಯನ ದರ್ಶನ ಮಾಡ್ದೋ, ಕಾಡು ನೋಡ್ದೋ, ದೊಡ್ಡ ದೊಡ್ಡ ಮರಗಿಡಗಳನ್ನು ನೋಡಿದೋ, ಆನೆಗಳ ಹಿಂಡು, ಕಾಡು ಕೋಣ, ಜಿಂಕೆ ಮುಂತಾದುವುಗಳನ್ನು ನೋಡ್ದೋ. ಪ್ರವಾಸಿಗರ ಮಂದಿರದಲ್ಲಿ ಆರಾಮವಾಗಿ ಎರಡು ದಿನ ವಿಶ್ರಾಂತಿ ತೆಗೆದುಕೊಂಡೋ, ಕಾಫಿ, ತಿಂಡಿ ತಿಂದು, ಹಾಡಿ, ನೃತ್ಯ ಮಾಡಿ, ಸಂತೋಷವಾಗಿ ಕಾಲ ಕಳೆದೋ, ಪಟ್ಟಣದ ಶಬ್ದ ಪರಿಸರದಲ್ಲಿದ್ದ ನಮಗೆ ನಿಜವಾಗಿಯೂ ಆ ವಾತಾವರಣ ತುಂಬಾ ಹಿತಕೊಟ್ಟಿತ್ತು. ಮನಸ್ಸಿಗೆ

ನೆಮ್ಮದಿ ಶಾಂತಿ ಒದಗಿಸಿತು. ಆ ವಾತಾವರಣ ನೋಡಿದ್ರೆ ಅಲ್ಲೇ ಇದ್ದುಬಿಡ್ತಾ ಅನ್ನಿಸುತ್ತೆ. ಎಲ್ಲಾ ಮುಗಿಸಿ ಬರುವಾಗ ಊರಿಗೆ ಏನಾಯ್ತು ಅಂತೀಯಾ? ಹತ್ತು ಹದಿನೈದು ಮೈಲಿ ದೂರ ಹೋದಮೇಲೆ ಯಾರೋ "ಅಲ್ಲಿ ಸ್ವಲ್ಪ ಗಲಾಟೆ ನಡೀತಾ ಇದೆ" ಅಂದ್ರು. ಆದ್ರೂ ಡ್ರೈವರ್ ಕೇಳ ಲಿಲ್ಲ. ನಾವೇನು ಅಲ್ಲಿ ನಿಲ್ಲಿಸಬೇಕೇ ಹೊರಟು ಹೋಗೋಣ ಅಂತ ಹೊರಟೋದ. ಊರ ಒಳಗೆ ನುಗ್ಗುತ್ತಿದ್ದಂತೇ ಗಲಾಟೆ ಕೇಳಿ ಬರುತ್ತಿತ್ತು. ಪೋಲೀಸಿನವರು ಗುಂಪು ಚದುರಿಸಲು ಲಾಟಿ ಚಾರ್ಜು ಮಾಡುತ್ತಿದ್ದರು. ಜನರು ಅವರಿಗೆ ದೂರದಿಂದ ಕಲ್ಲು ಎಸೆಯುತ್ತಿದ್ದರು. ಅವ್ರೂ ಸಹ ದೊಣ್ಣೆಗಳನ್ನು ತೆಗೆದುಕೊಂಡು ಕೋಪೋ ದ್ರೇಕರಾಗಿ ಕಾದಾಡುತ್ತಿದ್ದರು. ನಿಜವಾಗ್ಲೂ ಅದನ್ನು ನೋಡಿದ್ರೆ ಹಿಂದಿನ ಕಾಲದ ಯುದ್ಧದಂತೆ ಭಾಸವಾಗ್ತಾ ಇತ್ತು. ನಿಜವಾಗಿಯೂ ಬಸ್ಸಿನವನು ಯಾಕಪ್ಪಾ ಈ ಕಡೆ ಬಂದಾ ಅನ್ನಿಸ್ತು. ಸ್ವಲ್ಪ ಹೊತ್ತಿನಲ್ಲೇ ಬಸ್ಸುಗಳಿಗೆ ಕಲ್ಲು ಬೀರಿದರು. ಕೂಡಲೇ ಕೆಲವರು ನಿಲ್ಲಿಸಿದರು. ಬಸ್ಸಿನಲ್ಲಿದ್ದವರು ಬಾಗಿಲು ಮುಚ್ಚಿ ತಲೆಯನ್ನು ಬಗ್ಗಿಸಿಕೊಂಡು ಕುಳಿತರು. ಕಲ್ಲುಗಳು ಗಾಜುಗಳನ್ನು ಭೇದಿಸಿ

ಕೊಂಡು ಬರುತ್ತಿತ್ತು. ಜನರೆಲ್ಲಾ ಜೀವವನ್ನು ಕೈನಲ್ಲಿ ಹಿಡಿದುಕೊಂಡು ಕುಳಿತಿದ್ದರು "ಎಲ್ಲರೂ ಬಸ್ಸಿನಲ್ಲಿರುವವರು ಇಳಿಯಿರಿ" ಅಂದ್ರು ಪುಂಡರು. ಎಲ್ಲರೂ ಮೆಲ್ಲನೆ ಇಳಿದೆವು. ಪೆಟ್ರೋಲ್ ತಂದು ಸುರಿದು ಬಸ್ಸಿನ ಮೇಲೆ ಬೆಂಕಿ ಹಾಕಬೇಕು. ಅಷ್ಟರಲ್ಲಿ ಪೋಲೀಸಿನವರು ಅತ್ತ ಸಾಗಿದರು. ಗುಂಪು ಚದುರಿಸಿದರು ಹೆಂಗಸರು ಮಕ್ಕಳುಗಳ ಸ್ಥಿತಿ ತುಂಬಾ ಚಿಂತಾಜನಕವಾಗಿತ್ತು ಅಯ್ಯೋ ಅಪ್ಪಾ ಎಂದು ಚೀರಾಡುತ್ತಿದ್ದರು. ಗಲಾಟೆ, ಗೋಳೀಬಾರ್, ಟಿಯರ್ ಗ್ಯಾಸಿನಿಂದ ಜನರು ಕಂಗಾಲಾದರು. ಅಂಗಡಿಗಳನ್ನು ಮುಚ್ಚಿದರು. ಕೆಲವು ಪುಂಡರು ಅಂಗಡಿಗಳ ಲೂಟಿ ಮಾಡಿದರು. ನಾವು ಒಳ್ಳೇ ಇಕ್ಕಟ್ಟಿಗೆ ಸಿಕ್ಕಿಕೊಂಡವಲ್ಲಾ ಎಂದು ಪರಿತಪಿಸುತ್ತಿದ್ದೆವು. ಬಸ್ಸನ್ನು ಬೇಗ ತೆಗದು ಕೊಂಡು ಹೋಗಿ ಅಂದ್ರು ಪೋಲೀಸಿನವರು. ಎಲ್ಲರೂ ಸರಸರನೆ ಹತ್ತಿದರು. ಡ್ರೈವರ್ ಬೇಗ ಹೊರಟ. ಆ ಊರ ಜನರೆಲ್ಲಾ ಮನೆ ಬಾಗಿಲು ಮುಚ್ಚಿ ಒಳಗಿದ್ದರು. ಕಾರಿನವರನ್ನು ನಿಲ್ಲಿಸುವುದು ಹಣಕಾಸು ದೋಚುವುದು, ಸ್ಕೂಟರ್, ಸೈಕಲ್, ಮುಂತಾದ ವಾಹನಗಳಿಂದ ಬರುವವರಿಗೆಲ್ಲಾ ಹಿಂಸೆ. ಬಸ್ ನಿಲ್ದಾಣಕ್ಕೆ ಬಂದೆವು. ಅಲ್ಲಿ ಊರಿಂದ

ಬಂದವರ ಅವಸ್ಥೆ ನೋಡಲಾಗುತ್ತಿರಲಿಲ್ಲ. ಕೂಲಿಗಳಿಲ್ಲ, ಗಾಡಿಗಳಿಲ್ಲ. ಬಸ್ಸಿನವರು, ವಾಹನದವರು ಯಾರಾದ್ರೇನು ? ಯಾವ ಊರವರಾದ್ರೇನು ? ಎಲ್ಲರೂ ಮನುಷ್ಯರೇ ತಾನೇ? ಮಾನವ ಜನಾಂಗಕ್ಕೆ ನೋವಾದಂಗಲ್ವೇ ?

೧ :- ಖಂಡಿತ....

೨ :- ಯಾವುದೋ ದ್ವೇಷಕ್ಕೆ ಒಬ್ಬೊಬ್ಬರಿಗೆ ಜಗಳ ಆರಂಭ ಮಾಡಿದ್ರೆ ಊರೇ ಹತ್ತಿ ಉರಿದು ರಣರಂಗ ಆಗೋದು ಅಂದ್ರೇನು ? ಅದನ್ನ ಸಮಯ ಮಾಡಿಕೊಂಡು ಈ ಪೋಲಿಗಳು, ಪುಂಡರು ಜನರನ್ನು ಹಿಂಸೆ ಮಾಡುವುದು ಮತ್ತಷ್ಟು ತಪ್ಪಲ್ವೇ ? ಸಾರ್ವಜನಿಕ ಆಸ್ತಿ ನಾಶಮಾಡುವುದು ಒಳ್ಳೇದೇ ?

೧ :- ಆಮೇಲೆ ನಿಮ್ಮ ಕಥೆ ಏನಾಯ್ತು ?

೨- ಬಸ್ಸಿಗೆ ಎಲ್ಲರೂ ದಡಬಡನೆ ಹತ್ತಿದೆವು. ಎಲ್ಲರೂ ಸರಿಯಾಗಿದ್ದೀರಾ ? ಅಂದ ಡ್ರೈವರ್. ಎಲ್ಲಾ ಇದ್ದೀವಿ ಅಂದ್ವು. ಆತ ತಡೆರಹಿತ ಬಸ್ಸಿಗಿಂತ ಒಂದು ಕೈ ಮಿಗಿಲಾಗಿ ಓಡಿಸಿದ. ಅದನ್ನು ನೋಡಿದರೇ ಒಂದು ರೀತಿಯ ಭಯಾನಕವಾಗಿತ್ತು. ನಾವು ಒಳ್ಳೆ ಬಲವೊಗ್ಗಲಲ್ಲಿ ಎದ್ದಿದ್ವು ಅಂತ ಕಾಣುತ್ತೆ. ಅಂತೂ ಸುಖವೊಖವ್ವಾಗಿ ಊರಿಗೆ ತಲುಪಿದೆವು.

೧— ಡ್ರೈವರ್ ಪ್ರಯೋಗ ಮಾಡಿದ್ದು ಎಷ್ಟೊ ಕುತ್ತು ತಂದೊದಗಿಸಿತು. ಹೇಗೋ ಬಿಳಿಗಿರಿ ರಂಗಯ್ಯ ನಮ್ಮನ್ನ ಬಚಾವ್ ಮಾಡ್ದ.

೨— ಡ್ರೈವರ್ ಪ್ರಯೋಗ ಮಾಡಿದ್ದು ಎಷ್ಟೊಂದು ಕುತ್ತು ತಂದೊದಗಿಸಿತು. ಹೇಗೋ ಬಿಳಿಗಿರಿ ರಂಗಯ್ಯ ನಮ್ಮನ್ನು ಬಚಾವ್ ಮಾಡ್ದ.

೨— ನಮ್ಮ ಪಟ್ಟಣದಲ್ಲೂ ಸಹ ಈ ರೀತಿ ಹಲವಾರು ಪ್ರಕರಣಗಳನ್ನು ನೋಡಿದ್ದೀನಿ. ಈ ಹೊತ್ತು ಹತ್ತಿರದಲ್ಲಿ ನೋಡಿ, ಅನುಭವಿಸಿ ಬಂದದ್ದಾಯ್ತು. ಒಬ್ಬರ ಹಗೆಯಿಂದ ಸಾರ್ವಜನಿಕರಿಗೆ ಎಷ್ಟೊಂದು ತೊಂದರೆ ಆಗುತ್ತೆ ಎಂಬುದನ್ನು ಕಲಹ ಮಾಡು ವವರು ಅರ್ಥಮಾಡಿಕೊಳ್ಳಬೇಕು.

೧— ಹೌದು.